## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1102
ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 22.12.2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ ಸರ್ಕಾರಿ ಜಾಗ ಮಂಜೂರಾತಿಗಾಗಿ ಮಾಜಿ ಸೈನಿಕರು ಸಲ್ಲಿಸಿರುವ ಹಲವು ಅರ್ಜಿಗಳು ದೀರ್ಘ ಕಾಲದಿಂದ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಆ) | ಬಂದಿದ್ದಲ್ಲಿ, ಇದುವರೆಗೂ ಸಲ್ಲಿಕೆಯಾದ ಎಷ್ಟು ಅರ್ಜಿಗಳು ವಿಲೇವಾರಿಗೆ ಬಾಕಿ ಉಳಿದಿವೆ; | 565 ಅರ್ಜಿಗಳು ವಿಲೇವಾರಿಗೆ ಬಾಕಿ ಉಳಿದಿರುತ್ತವೆ. |
| (ಇ) | ಸದರಿ ಅರ್ಜಿಗಳು ದೀರ್ಘ ಕಾಲದಿಂದ ಬಾಕಿ ಉಳಿದಿರಲು ಕಾರಣಗಳೇನು; (ಪ್ರಕರಣವಾರು ವಿವರಗಳನ್ನು ನೀಡುವುದು) | ಅರ್ಜಿದಾರರು ಮಂಜೂರು ಮಾಡುವಂತೆ ಕೋರಿರುವ ಜಮೀನು ಭೂ ಲಭ್ಯತಾ ಪಟ್ಟಿಯಲ್ಲಿ ಲಭ್ಯವಿಲ್ಲದಿರುವುದರಿಂದ ಸದರಿ ಅರ್ಜಿಗಳು ಬಾಕಿ ಉಳಿದಿರುತ್ತವೆ. |
| (ಈ) | ಯಾವ ಕಾಲಮಿತಿಯೊಳಗೆ ದೀರ್ಘ ಕಾಲದಿಂದ ಬಾಕಿ ಉಳಿದಿರುವ ಈ ಎಲ್ಲಾ ಅರ್ಜಿಗಳನ್ನು ವಿಲೇವಾರಿ ಮಾಡಿ, ದೇಶ ಸೇವೆಗೆ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮಾಜಿ ಸೈನಿಕರಿಗೆ ನ್ಯಾಯ ಒದಗಿಸಿಕೊಡಲಾಗುವುದು; | ಭೂ ಲಭ್ಯತಾ ಪಟ್ಟಿಯನ್ವಯ ಜಮೀನು ಲಭ್ಯವಿಲ್ಲದಿದ್ದಲ್ಲಿ, ಜಮೀನಿಗೆ ಬದಲಾಗಿ ಗ್ರಾಮೀಣ ಪ್ರದೇಶಗಳಲ್ಲಿ 2400 ಚದರ ಅಡಿ ಅಳತೆಯ ನಿವೇಶನವನ್ನು ಅಥವಾ ನಗರ ಪ್ರದೇಶಗಳಲ್ಲಿ 1200 ಚದರ ಅಡಿ ಅಳತೆಯ ನಿವೇಶನವನ್ನು ಮಂಜೂರು ಮಾಡಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳಲ್ಲಿ ಅವಕಾಶ ಕಲ್ಪಿಸಿ, ದಿನಾಂಕ:27.10.2021 ರಂದು ಅಧಿಸೂಚನೆ ಹೊರಡಿಸಲಾಗಿದೆ. ಅದರಂತೆ ಬಾಕಿ ಉಳಿದಿರುವ ಅರ್ಜಿಗಳನ್ನು ನಿಯಮಾನುಸಾರ ವಿಲೇಗೊಳಿಸಲು ಕ್ರಮವಹಿಸಲಾಗುತ್ತಿದೆ. |
| (ಉ) | ಕಳೆದ 3 ವರ್ಷಗಳಲ್ಲಿ, ಸರ್ಕಾರಿ ಜಾಗ ಮಂಜೂರಾತಿ ಕೋರಿರುವ ಎಷ್ಟು ಜನ ಮಾಜಿ ಸೈನಿಕರಿಗೆ ಇದುವರೆಗೆ ಸರ್ಕಾರಿ ಜಾಗವನ್ನು ಮಂಜೂರು ಮಾಡಲಾಗಿದೆ? | ಕಳೆದ ಮೂರು ವರ್ಷಗಳಲ್ಲಿ ಒಬ್ಬ ಮಾಜಿ ಸೈನಿಕರಿಗೆ ಸರ್ಕಾರಿ ಜಮೀನು ಮಂಜೂರು ಮಾಡಲಾಗಿದೆ. |

**(ಕಡತ ಸಂಖ್ಯೆ:ಕಂಇ 22 ಎಲ್ ಜಿಪಿ 2021)**

(ಆರ್.ಅಶೋಕ)
ಕಂದಾಯ ಸಚಿವರು